## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 144(1046)
ಸದಸ್ಯರ ಹೆಸರು : ಶ್ರೀ ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 16/03/2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಉತ್ತರ ಕನ್ನಡ ಜಿಲ್ಲೆಯಲ್ಲಿ ಅಕ್ಷರ ದಾಸೋಹ ಯೋಜನೆಯ ಅಗ್ನಿನಂದಕ (ಫೈಯರ್ ಪ್ರೂಫ್) ಏಪ್ರಾನ್ ಖರೀದಿ ಅವ್ಯವಹಾರದಲ್ಲಿ ಅಧಿಕಾರಿಗಳು ಶಾಮೀಲಾಗಿರುತ್ತಾರೆಯೆಂದು ಬೆಳಕಿಗೆ ಬಂದಿದ್ದು, ಇದರಲ್ಲಿ ಉನ್ನತ ಹುದ್ದೆ ಅಲಂಕರಿಸಿದ ಅಧಿಕಾರಿಯೊಬ್ಬರು ತಮ್ಮದೇ ಏಜೆನ್ಸಿಯೊಂದರ ಮೂಲಕ ಈ ಅವ್ಯವಹಾರ ನಡೆಸಿದ್ದು, ಈಗ ಜಿಲ್ಲಾ ಪಂಚಾಯತ್ ಅಧಿಕಾರಿಗಳು ತಾವೇ ಏಜೆನ್ಸಿಗಳನ್ನು ನಿಗಧಿಪಡಿಸಿ ಶಿಕ್ಷಣ ಇಲಾಖೆಗೆ ನಿರ್ದೇಶನ ನೀಡಿ ಸಿ.ಆರ್.ಪಿ. ಗಳ ಮೂಲಕ ಶಾಲೆಗಳಿಗೆ ಏಪ್ರಾನ್ ವಿತರಿಸಿ ಏಜೆನ್ಸಿಗಳಿಗೆ ಚೆಕ್ ನೀಡುವಂತೆ ಶಿಕ್ಷಕರಿಗೆ ಬಲವಂತ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು). | ಇಲ್ಲ |
| ಆ) | ಮಾರುಕಟ್ಟೆ ದರಕ್ಕಿಂತ ದುಪ್ಪಟ್ಟು ದರದಲ್ಲಿ ಪೂರೈಸಲಾದ ಏಪ್ರಾನ್ ಕಳಪೆ ಮಟ್ಟದಾಗಿರುವುದರಿಂದ ಅವ್ಯವಹಾರದ ಆರೋಪ ವ್ಯಕ್ತವಾಗಿರುವುದರಿಂದ ಪೂರೈಸುವ ಪೂರ್ವದಲ್ಲಿ ಈ ಕುರಿತು ಟೆಂಡರ್ ಕರೆದಿರುವ ವಿವರ, ಟೆಂಡರ್ ಹಾಕಿರುವವರ ವಿವರ ಪೂರೈಕೆದಾರರು ದರದ ಪ್ರಕಾರ ಪೂರೈಸಿದ ವಿವರ, ನೀಡುವುದು; (ಕಾರವಾರ ಶೈಕ್ಷಣಿಕ ಜಿಲ್ಲೆಯ 5 ತಾಲ್ಲೂಕುಗಳ ವಿವರ ನೀಡುವುದು); | ಶಾಲಾ ಎಸ್‌ಡಿಎಂಸಿ ಸಮಿತಿಗಳ ಮೂಲಕ ಶಾಲಾ ಮುಖ್ಯ ಶಿಕ್ಷಕರು ಏಪ್ರಾನ್ ಖರೀದಿಸಿದ್ದು, ಪ್ರತಿ ಶಾಲೆಯಲ್ಲಿನ ಖರೀದಿಯ ಮೊತ್ತ ರೂ.5000/- ಮೀರಿಲ್ಲದ ಕಾರಣ ದರಪಟ್ಟಿ/ಟೆಂಡರ್ ಪ್ರಕ್ರಿಯೆ ನಡೆಸಿರುವುದಿಲ್ಲ. |
| (ಇ) | ಏಪ್ರಾನ್ ಖರೀದಿ ದೊಡ್ಡ ಪ್ರಮಾಣದ ಅವ್ಯವಹಾರ ಆಗಿರುತ್ತದೆಯೆಂದು ಹಾಗೂ ಕಳಪೆ ಮಟ್ಟದ ಏಪ್ರಾನ್ ಪೂರೈಸಿರುತ್ತಾರೆಂದು ಸ್ಥಳೀಯ ಗ್ಯಾಸ್ ಏಜೆನ್ಸಿಯವರು ನೋಡಿ ದೃಢಪಡಿಸಿದ್ದರೂ | ಉತ್ತರ ಕನ್ನಡ ಹಾಗೂ ಶಿರಸಿ ಶೈಕ್ಷಣಿಕ ಜಿಲ್ಲೆಯಲ್ಲಿ 2013-14ನೇ ಸಾಲಿನಲ್ಲಿ ಅಕ್ಷರ ದಾಸೋಹ ಕಾರ್ಯಕ್ರಮದಡಿ ಸುರಕ್ಷತೆ ಮತ್ತು ಶುಚಿತ್ವ ಕಾಪಾಡುವ ಉದ್ದೇಶದಿಂದ ಅಡುಗೆಯವರಿಗೆ ಫೈಯರ್ ಪ್ರೂಫ್ ಏಪ್ರಾನ್ ಖರೀದಿಸಲು ಶಾಲೆಯಲ್ಲಿನ ಅಡುಗೆಯವರ |

| | | |
|---|---|---|
| | ಸಂಬಂಧಿಸಿದ ಶಿಕ್ಷಣ ಇಲಾಖೆಯ ಅಧಿಕಾರಿಯು ಒತ್ತಡದಿಂದ ನಿಗದಿಸಿದ ಏಪ್ರಾನ್ ಏಜೆನ್ಸಿಯವರಿಗೆ ಶಿಕ್ಷಕರ ಮೂಲಕ ಚೆಕ್ ನೀಡಿರುವುದು ಬೆಳಕಿಗೆ ಬಂದಿರುವುದರಿಂದ ಸದರಿ ವಿಷಯದಲ್ಲಿ ಉನ್ನತ ಅಧಿಕಾರಿಗಳಿಂದ ಸರ್ಕಾರ ತನಿಖೆ ನಡೆಸುವುದೇ?(ವಿವರ ನೀಡುವುದು) | ಸಂಖ್ಯೆಗನುಗುಣವಾಗಿ ತಲಾ 1000 ರೂ ಗಳಂತೆ ಶಿರಸಿ ಮತ್ತು ಉತ್ತರ ಕನ್ನಡ ಶೈಕ್ಷಣಿಕ ಜಿಲ್ಲೆಗಳ ಸಂಬಂಧಿಸಿದ ತಾಲ್ಲೂಕ್ ಪಂಚಾಯತಿಗಳಿಂದ ಒಟ್ಟು ರೂ. 43,24,000/- ನೇರವಾಗಿ ಅಕ್ಷರ ದಾಸೋಹ ಖಾತೆಯ ಮೂಲಕ ಶಾಲಾ ಎಸ್‌ಡಿಎಂಸಿ ಖಾತೆಗೆ ಜಮಾ ಮಾಡಲಾಗಿತ್ತು. ಈ ಪೈಕಿ ಶಿರಸಿ ಶೈಕ್ಷಣಿಕ ಜಿಲ್ಲೆಯಲ್ಲಿ ರೂ. 10,87,378/- ಗಳು ಮತ್ತು ಉತ್ತರ ಕನ್ನಡ ಶೈಕ್ಷಣಿಕ ಜಿಲ್ಲೆಯಲ್ಲಿ ರೂ. 19,74,642/- ಗಳು ಸೇರಿ ಒಟ್ಟು ರೂ. 30,62,020/- ಗಳನ್ನು ಸಂಬಂಧಿಸಿದ ಪ್ರಾಥಮಿಕ ಹಾಗೂ ಪ್ರೌಢ ಶಾಲಾ ಮುಖ್ಯ ಶಿಕ್ಷಕರು ಎಸ್‌ಡಿಎಂಸಿ ಮೂಲಕ ವಿವಿಧ ಏಜೆನ್ಸಿಗಳಿಂದ ಏಪ್ರಾನ್ ಖರೀದಿಸಲು ವೆಚ್ಚಮಾಡಿರುತ್ತಾರೆ.<br><br>ಉತ್ತರ ಕನ್ನಡ ಮತ್ತು ಶಿರಸಿ ಶೈಕ್ಷಣಿಕ ಜಿಲ್ಲೆಯ ಅಕ್ಷರ ದಾಸೋಹ ಕಾರ್ಯಕ್ರಮದಡಿ ಅಡುಗ ಸಿಬ್ಬಂದಿಗಳಿಗೆ ನೀಡಲಾಗಿರುವ ಏಪ್ರಾನ್ ಖರೀದಿಯಲ್ಲಿ ನಡೆದಿರುವ ಅವ್ಯವಹಾರದ ಬಗ್ಗೆ ಪರೀಶಿಲನೆ ನಡೆಸಿ, ಮಾರುಕಟ್ಟೆ ದರಕ್ಕಿಂತ ಹೆಚ್ಚಿನ ಹಣವನ್ನು ಪಾವತಿಸಿ ಸರ್ಕಾರದ ಬೊಕ್ಕಸಕ್ಕೆ ಆರ್ಥಿಕ ನಷ್ಟವನ್ನುಂಟು ಮಾಡಿರುವ ಮುಖ್ಯ ಶಿಕ್ಷಕರನ್ನು ಗುರುತಿಸಿ ಅವರ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳಲು ವಿಫಲರಾಗಿರುವ ಉಪ ನಿರ್ದೇಶಕರು / ಕ್ಷೇತ್ರ ಶಿಕ್ಷಣಾಧಿಕಾರಿ ವಿರುದ್ಧ ವಿಚಾರಣೆ ನಡೆಸಲು ದಿನಾಂಕ:22/05/2018ರಲ್ಲಿ ನಿವೃತ್ತ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸದರಿ ಪ್ರಕರಣದಲ್ಲಿ ವಿಚಾರಣೆಯನ್ನು ನಡೆಸಿ, ವಿಚಾರಣಾಧಿಕಾರಿಗಳು ದಿನಾಂಕ:24/09/2018 ರಂದು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಅಕ್ಷರ ದಾಸೋಹ ಕಾರ್ಯಕ್ರಮದಡಿ ಅಡುಗೆ ಸಿಬ್ಬಂದಿಗಳಿಗೆ ನೀಡಲಾಗುವ ಏಪ್ರಾನ್ ಖರೀದಿಯಲ್ಲಿ ಉತ್ತರ ಕನ್ನಡ/ಶಿರಸಿ ಶೈಕ್ಷಣಿಕ ಜಿಲ್ಲೆಗಳ ಉಪನಿರ್ದೇಶಕರು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಪಾತ್ರ ಇರುವುದಿಲ್ಲವೆಂದು ವರದಿ ಸಲ್ಲಿಸಿರುತ್ತಾರೆ. ಹಾಗೆಯೇ ಜಿಲ್ಲಾ ಪಂಚಾಯತ್ ಮತ್ತು ತಾಲ್ಲೂಕು ಪಂಚಾಯತ್ ಅಧಿಕಾರಿಗಳು ಮತ್ತು ಎಸ್.ಡಿ.ಎಂ.ಸಿ. ಅಧ್ಯಕ್ಷರು/ಸದಸ್ಯರುಗಳು ಜವಾಬ್ದಾರರಾಗಿರುತ್ತಾರೆ ಎಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ.<br><br>ಅದರಂತೆ ಈ ಪ್ರಕರಣದಲ್ಲಿ ಸಂಬಂಧಿಸಿದ ಉಪನಿರ್ದೇಶಕರು ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳನ್ನು ಸರ್ಕಾರದ ಆದೇಶ ಸಂಖ್ಯೆ:ಇಡಿ 44 ಡಿಜಿಪಿ 2017, ದಿನಾಂಕ :29/11/2019ರನ್ವಯ ದೋಷಮುಕ್ತಗೊಳಿಸಿ ಆದೇಶಿಸಲಾಗಿದೆ. |

| | | |
|---|---|---|
| | | ಮುಂದುವರೆದು, ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನಾಧರಿಸಿ ಉತ್ತರ ಕನ್ನಡ/ಶಿರಸಿ ಶೈಕ್ಷಣಿಕ ಜಿಲ್ಲೆಗಳ ಜಿಲ್ಲಾ ಪಂಚಾಯತ್ ಮತ್ತು ತಾಲ್ಲೂಕು ಪಂಚಾಯತ್ ಅದಿಕಾರಿಗಳು ಮತ್ತು ಎಸ್ ಡಿ ಎಂ ಸಿ ಅಧ್ಯಕ್ಷರು/ಸದಸ್ಯರುಗಳ ವಿವರಣೆಯನ್ನು ಪಡೆದು ಸದರಿಯವರುಗಳ ವಿರುದ್ಧ ನಿಯಮಾನುಸಾರ ಶಿಸ್ತು ಕ್ರಮ ಜರುಗಿಸುವಂತೆ ಅರೆ ಸರ್ಕಾರಿ ಪತ್ರ ದಿ:03/11/2018ರಲ್ಲಿ ಮುಖ್ಯಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾ ಪಂಚಾಯತ್ ಉತ್ತರ ಕನ್ನಡ ಜಿಲ್ಲೆ ಇವರನ್ನು ಕೋರಲಾಗಿತ್ತು. ಅದರಂತೆ, ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ದಿನಾಂಕ : 25.03.2019 ರಂದು ಸಂಬಂಧಪಟ್ಟ ಶಿಕ್ಷಣಾಧಿಕಾರಿ, ಅಕ್ಷರ ದಾಸೋಹ, ಜಿ.ಪಂ., ಕಾರವಾರ ಹಾಗೂ 11 ತಾಲ್ಲೂಕಿನಲ್ಲಿ ಸಹಾಯಕ ನಿರ್ದೇಶಕರು, ತಾ. ಪಂ, ಅಕ್ಷರ ದಾಸೋಹ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಸದರಿಯವರುಗಳಿಂದ ರಕ್ಷಣಾ ಹೇಳಿಕೆಯನ್ನು ಪಡೆದು ದಿನಾಂಕ:14/05/2019ರಂದು ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಸಲ್ಲಿಸಿದ್ದು, ಈ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ.<br><br>ಮೇಲಿನಂತೆ ಈ ಬಗ್ಗೆ ನಡೆಸಲಾದ ವಿಚಾರಣೆಗಳಿಂದ ಶಾಲಾ ಹಂತದಲ್ಲಿಯೇ ಖರೀದಿ ಪ್ರಕ್ರಿಯೆ ನಡೆದಿರುವುದು ದೃಢಪಟ್ಟಿರುತ್ತದೆ. ಆದ್ದರಿಂದ ಹೆಚ್ಚುವರಿಯಾಗಿ ಪಾವತಿಯಾಗಿರುವ ಹಣವನ್ನು ಸಂಬಂಧಿಸಿದ ಶಾಲೆಗಳ ಮುಖ್ಯಶಿಕ್ಷಕರಿಂದಲೇ ವಸೂಲಿ ಮಾಡುವುದು ಅನಿವಾರ್ಯವಾಗಿದೆ.<br><br>ಉತ್ತರ ಕನ್ನಡ ಉತ್ತರ ಕನ್ನಡ ಜಿಲ್ಲಾ ಪಂಚಾಯತ್ ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿಸಮಿತಿಯ ನಿರ್ಣಯ ಕೈಗೊಂಡು ಏಪ್ರಾನ್ ಖರೀದಿಯಲ್ಲಿ ಅವ್ಯವಹಾರ ನಡೆದಿದೆ ಎಂದು ಕಂಡು ಬಂದಲ್ಲಿ ಅಂತಹ ಶಾಲಾ ಮುಖ್ಯಶಿಕ್ಷಕರುಗಳಿಂದ ಸರ್ಕಾರಕ್ಕೆ ನಷ್ಟವಾದ ಹೆಚ್ಚುವರಿ ಹಣವನ್ನು ಶೇ.15% ರ ಬಡ್ಡಿದರದಲ್ಲಿ ವಸೂಲಿ ಮಾಡಲು ಕ್ಷೇತ್ರ ಶಿಕ್ಷಣಾಧಿಕಾರಿಗಳಿ ಸೂಚಿಸಿರುತ್ತಾರೆ. ಅದರಂತೆ ಏಪ್ರಾನ್ ಖರೀದಿಗಾಗಿ ಹೆಚ್ಚುವರಿ ವೆಚ್ಚ ಮಾಡಿರುವ ಹಣವನ್ನು ಶೇ.15% ರ ಬಡ್ಡಿದರದಲ್ಲಿ ವಸೂಲಿ ಮಾಡಲು ಕ್ರಮವಹಿಸಲಾಗುತ್ತಿದೆ. |

**ಸಂಖೆ: ಇಪಿ 32 ಡಿಎಆರ್ 2020.**

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು